# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ)

ಹದಿನೈದನೇ ಅಧಿವೇಶನ

## ಕಾರ್ಯಕಲಾಪಗಳ ಪಟ್ಟಿ

ಸೋಮವಾರ, ದಿನಾಂಕ 20ನೇ ಫೆಬ್ರವರಿ, 2023

(ಸಮಯ: ಬೆಳಿಗ್ಗೆ 10.30 ಗಂಟೆಗೆ)

----

### 1. ರಾಜ್ಯಪಾಲರ ಭಾಷಣಕ್ಕೆ ಸಂಬಂಧಿಸಿದ ವಂದನಾರ್ಪಣಾ ಪ್ರಸ್ತಾವ

"ದಿನಾಂಕ 13ನೇ ಫೆಬ್ರವರಿ, 2023ರಂದು ಶ್ರೀ ಸಿ.ಟಿ. ರವಿ ರವರು ಸೂಚಿಸಿ, ಶ್ರೀ ಪಿ. ರಾಜೀವ್ ರವರು ಅನುಮೋದಿಸಿದ ಕೆಳಕಂಡ ಪ್ರಸ್ತಾವದ ಮೇಲೆ ನಡೆದ ಚರ್ಚೆಗೆ ಸರ್ಕಾರದ ಉತ್ತರ ಮತ್ತು ಅಂಗೀಕರಿಸುವುದು.

"ದಿನಾಂಕ 10ನೇ ಫೆಬ್ರವರಿ, 2023 ರಂದು ವಿಧಾನಮಂಡಲದ ಉಭಯ ಸದನಗಳ ಸದಸ್ಯರುಗಳನ್ನುದ್ದೇಶಿಸಿ ದಯಪಾಲಿಸಿದ ಭಾಷಣಕ್ಕಾಗಿ ಈ ಅಧಿವೇಶನದಲ್ಲಿ ಸೇರಿರುವ ವಿಧಾನಸಭೆಯ ಸದಸ್ಯರಾದ ನಾವು ಮಾನ್ಯ ರಾಜ್ಯಪಾಲರವರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸಲು ಅಪ್ಪಣೆ ಕೋರುತ್ತೇವೆ".

### 2. ವರದಿಯನ್ನೊಪ್ಪಿಸುವುದು

**ಶ್ರೀ ಅಭಯ ಪಾಟೀಲ** (ಅಧ್ಯಕ್ಷರು, ಜಂಟಿ ಸದನ ಸಮಿತಿ) ಅವರು ರಾಜ್ಯದಲ್ಲಿನ ಶುದ್ಧ ಕುಡಿಯುವ ನೀರಿನ ಘಟಕಗಳ ಅಳವಡಿಕೆ ಮತ್ತು ನಿರ್ವಹಣೆ ವಿಚಾರದಲ್ಲಿ ನಡೆದಿರುವ ಅವ್ಯವಹಾರಗಳ ಕುರಿತಂತೆ ವಿಚಾರಣೆಯನ್ನು ನಡೆಸಿ ವರದಿಯನ್ನು ನೀಡಲು ರಚಿಸಲಾಗಿರುವ ಜಂಟಿ ಸದನ ಸಮಿತಿಯ ವರದಿಯನ್ನೊಪ್ಪಿಸುವುದು.

### 3. ವಿತ್ತೀಯ ಕಾರ್ಯಕಲಾಪಗಳು

2023–24ನೇ ಸಾಲಿನ ಆಯವ್ಯಯ ಅಂದಾಜುಗಳ ಮೇಲೆ ಸಾಮಾನ್ಯ ಚರ್ಚೆ

## 4. ಶಾಸನ ರಚನೆ

**ವಿಧೇಯಕಗಳನ್ನು ಪರ್ಯಾಲೋಚಿಸುವುದು ಮತ್ತು ಅಂಗೀಕರಿಸುವುದು**

**1. ಡಾ. ಸಿ.ಎನ್. ಅಶ್ವಥ್ ನಾರಾಯಣ (ಮಾನ್ಯ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರು) ಅವರು:-**

ಅ) 2022ನೇ ಸಾಲಿನ ಜಿ.ಎಂ. ವಿಶ್ವವಿದ್ಯಾಲಯ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**2. ಡಾ. ಸಿ.ಎನ್. ಅಶ್ವಥ್ ನಾರಾಯಣ (ಮಾನ್ಯ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರು) ಅವರು:-**

ಅ) 2022ನೇ ಸಾಲಿನ ಕಿಷ್ಕಿಂದ ವಿಶ್ವವಿದ್ಯಾಲಯ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**3. ಡಾ. ಸಿ.ಎನ್. ಅಶ್ವಥ್ ನಾರಾಯಣ (ಮಾನ್ಯ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರು) ಅವರು:-**

ಅ) 2022ನೇ ಸಾಲಿನ ಆಚಾರ್ಯ ವಿಶ್ವವಿದ್ಯಾಲಯ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**4. ಡಾ. ಸಿ.ಎನ್. ಅಶ್ವಥ್ ನಾರಾಯಣ (ಮಾನ್ಯ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರು) ಅವರು:-**

ಅ) 2022ನೇ ಸಾಲಿನ ಸಪ್ತಗಿರಿ ಎನ್ ಪಿ ಎಸ್ ವಿಶ್ವವಿದ್ಯಾಲಯ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**5. ಡಾ. ಸಿ.ಎನ್. ಅಶ್ವಥ್ ನಾರಾಯಣ (ಮಾನ್ಯ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರು) ಅವರು:-**

ಅ) 2022ನೇ ಸಾಲಿನ ರಾಜ್ಯ ಒಕ್ಕಲಿಗರ ಸಂಘ ವಿಶ್ವವಿದ್ಯಾಲಯ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**6. ಡಾ. ಸಿ.ಎನ್. ಅಶ್ವಥ್ ನಾರಾಯಣ (ಮಾನ್ಯ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರು) ಅವರು:-**

ಅ) 2022ನೇ ಸಾಲಿನ ಟಿ. ಜಾನ್ ವಿಶ್ವವಿದ್ಯಾಲಯ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

..3/

7. **ಶ್ರೀ ವಿ. ಸುನಿಲ್ ಕುಮಾರ್ (ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು) ಅವರು:-**

ಅ) 2022ನೇ ಸಾಲಿನ ಕನ್ನಡ ಭಾಷಾ ಸಮಗ್ರ ಅಭಿವೃದ್ಧಿ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

## 5. ಪ್ರಶ್ನೋತ್ತರ

| | | |
|---|---|---|
| ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು | : | ಐದನೇ ಪಟ್ಟಿ |
| ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು | : | ಐದನೇ ಪಟ್ಟಿ |

## 6. ಗಮನ ಸೆಳೆಯುವ ಸೂಚನೆಗಳು

1) **ಡಾ. ಹೆಚ್.ಡಿ. ರಂಗನಾಥ್ ಅವರು** – ಕುಣಿಗಲ್ ತಾಲ್ಲೂಕಿನಾದ್ಯಂತ ಅಸಮರ್ಪಕ ವಿದ್ಯುತ್ ಸರಬರಾಜಿನಿಂದ ರೈತರಿಗೆ ಹಾಗೂ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರ ಗಮನ ಸೆಳೆಯುವುದು.

2) **ಶ್ರೀ ಡಿ.ಕೆ. ಶಿವಕುಮಾರ್ ಅವರು** – ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಶಿವರಾಮ ಕಾರಂತ ಬಡಾವಣೆಯನ್ನು ನಿರ್ಮಿಸಲು ಸ್ವಾಧೀನಪಡಿಸಿಕೊಂಡ ಭೂಮಿ, ಬಡಾವಣೆ ನಿರ್ಮಿಸಿರುವ ವಿಸ್ತೀರ್ಣ, ಬಾಕಿ ಉಳಿದಿರುವ ವಿಸ್ತೀರ್ಣ, ಭೂ ಸ್ವಾಧೀನಪಡಿಸಿಕೊಂಡ ರೈತರಿಗೆ ಪ್ರತಿ ಎಕರೆಗೆ ನೀಡಿರುವ ಪರಿಹಾರ ಮೊತ್ತ, ಕಾಮಗಾರಿಯನ್ನು ನಿರ್ವಹಿಸಲು ಗುತ್ತಿಗೆಯನ್ನು ನೀಡಿರುವ ಕಂಪನಿ/ಏಜೆನ್ಸಿ, ಗುತ್ತಿಗೆಯನ್ನು ನೀಡುವಾಗ ಅನುಸರಿಸಿರುವ ಮಾನದಂಡ, ಬಡಾವಣೆಯ ನಿರ್ಮಾಣದ ಹಂತ ಇವುಗಳ ವಿವರ ಹಾಗೂ ಟೆಂಡರ್ ಪ್ರಕ್ರಿಯೆಯಲ್ಲಿ ನಡೆದಿರುವ ಅವ್ಯವಹಾರ ಕುರಿತು ಕ್ರಮ ಕೈಗೊಳ್ಳದಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

3) **ಶ್ರೀಯುತರುಗಳಾದ ಹೆಚ್.ಕೆ. ಕುಮಾರಸ್ವಾಮಿ, ಕೆ.ಎಸ್. ಲಿಂಗೇಶ್, ಸುರೇಶ್ ಗೌಡ ಹಾಗೂ ಇತರರು** – ಹಾಸನ ನಗರ ಸಭೆಗೆ ವಿವಿಧ ಗ್ರಾಮಗಳನ್ನು ಸೇರ್ಪಡೆ ಮಾಡಿ ಆದೇಶವಾಗಿದ್ದರೂ ಕೆಲವು ಗ್ರಾಮ ಪಂಚಾಯತಿಗಳಲ್ಲಿ ನಿಯಮಬಾಹಿರವಾಗಿ ಕೋಟ್ಯಾಂತರ ರೂಪಾಯಿ ಬೆಲೆ ಬಾಳುವ ಸಿ.ಎ. ನಿವೇಶನಗಳನ್ನು ವಿವಿಧ ಸಂಘಗಳಿಗೆ ನೀಡಿರುವ ಕುರಿತು ಸಮಗ್ರವಾಗಿ ತನಿಖೆ ಮಾಡಿ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

4) **ಶ್ರೀ ಯು.ಟಿ. ಅಬ್ದುಲ್ ಖಾದರ್ ಅವರು** – ಮಂಗಳೂರು ತಾಲ್ಲೂಕಿನ ಜೆ.ಬಿ.ಎಫ್. ಕಂಪನಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರಿಗೆ ವೇತನ ಹಾಗೂ ಇತರೆ ಸೌಲಭ್ಯಗಳನ್ನು ಕೂಡಲೇ ಒದಗಿಸುವ ಬಗ್ಗೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ಗಮನ ಸೆಳೆಯುವುದು.

..4/

5) **ಶ್ರೀ ಎನ್. ಮಹೇಶ್ ಅವರು** – ಕೊಳ್ಳೇಗಾಲ ವಿಧಾನಸಭಾ ಕ್ಷೇತ್ರದ ಯಳಂದೂರು ಸರ್ಕಾರಿ ಆಸ್ಪತ್ರೆಯನ್ನು 100 ಹಾಸಿಗೆಗಳ ಆಸ್ಪತ್ರೆಯಾಗಿ ಮೇಲ್ದರ್ಜೆಗೇರಿಸಿ ನೂತನ ಕಟ್ಟಡ ನಿರ್ಮಿಸಿ ಅಗತ್ಯವಿರುವ ವೈದ್ಯಕೀಯ ಸಲಕರಣೆಗಳು ಹಾಗೂ ಪೀಠೋಪಕರಣಗಳ ಖರೀದಿಗೆ ಅಗತ್ಯ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

6) **ಶ್ರೀ ಎಂ. ಕೃಷ್ಣಾರೆಡ್ಡಿ ಅವರು** – ಚಿಂತಾಮಣಿಯಲ್ಲಿರುವ ಸರ್ಕಾರಿ ಬಾಲಕರ ಪ್ರಥಮ ದರ್ಜೆ ಕಾಲೇಜು ಮತ್ತು ಸ್ನಾತಕೋತ್ತರ ಕೇಂದ್ರದಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ನೀಡದಿರುವ ಬಗ್ಗೆ ಮಾನ್ಯ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರ ಗಮನ ಸೆಳೆಯುವುದು.

7) **ಶ್ರೀ ಈಶ್ವರ್ ಭೀ. ಖಂಡ್ರೆ ಅವರು** – ರಾಜ್ಯದಲ್ಲಿ ನವೀಕರಿಸಬಹುದಾದ ವಿದ್ಯುತ್ ಯೋಜನೆಯನ್ನು ಸಮರ್ಪಕವಾಗಿ ಕಾಲಮಿತಿಯಲ್ಲಿ ಅನುಷ್ಠಾನ ಮಾಡಲು ಭೂ ಪರಿವರ್ತನೆ ಪ್ರಕ್ರಿಯೆಯನ್ನು ಸರಳೀಕರಿಸುವ ಬಗ್ಗೆ ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರ ಗಮನ ಸೆಳೆಯುವುದು.

8) **ಶ್ರೀ ಹೆಚ್.ಕೆ. ಕುಮಾರಸ್ವಾಮಿ ಅವರು** – ಕಂದಾಯ ಇಲಾಖೆಯ ನಮೂನೆ 94 ಸಿ ಅಡಿಯಲ್ಲಿ ಅರ್ಜಿ ಸಲ್ಲಿಸಿರುವ ಫಲಾನುಭವಿಗಳಿಗೆ ಅರಣ್ಯ ಇಲಾಖೆ ಹಾಗೂ ಜಲಾಶಯ ಯೋಜನೆಯ ನಿರಾಶ್ರಿತರಿಗೆ ಜಮೀನು ಮೀಸಲಿರಿಸುವ ಕಾರಣದಿಂದ ಹಕ್ಕುಪತ್ರ ನೀಡಲು ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

9) **ಶ್ರೀ ಸಿ.ಎಸ್. ನಿರಂಜನ ಕುಮಾರ್ ಅವರು** – ರಾಜ್ಯದಲ್ಲಿ ಬೆಳೆಯುವ ಅರಿಶಿಣ ಬೆಳೆಗೆ ಪ್ರತಿ ಕ್ವಿಂಟಾಲ್‌ಗೆ ರೂ.17,500/–ಗಳನ್ನು ಬೆಂಬಲ ಬೆಲೆಯಾಗಿ ಘೋಷಣೆ ಮಾಡುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

**ಎಂ.ಕೆ.ವಿಶಾಲಾಕ್ಷಿ**
**ಕಾರ್ಯದರ್ಶಿ**

---

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ಅಂತರ್ಜಾಲದ ಈ ವಿಳಾಸದಲ್ಲಿ ಪಡೆದುಕೊಳ್ಳಬಹುದು**
***http://kla.kar.nic.in/assembly/lob/lob.htm***